# <u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 241

ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ದಿನಾಂಕ : 22.09.2020

ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸ್ಥಳೀಯ ಸಂಸ್ಥೆಗಳಾದ ಪಟ್ಟಣ ಪಂಚಾಯ್ತಿ, ಪುರಸಭೆ ಹಾಗೂ ನಗರಸಭೆಗಳ ಅಧ್ಯಕ್ಷ/ಉಪಾಧ್ಯಕ್ಷರ ಹುದ್ದೆಗಳಿಗೆ ಕಳೆದ 2 ವರ್ಷಗಳಿಂದ ಚುನಾವಣೆ ನಡೆಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ. |
| ಆ) | ಸದರಿ ಅಧ್ಯಕ್ಷರ/ಉಪಾಧ್ಯಕ್ಷರ ಸ್ಥಾನಕ್ಕೆ ಚುನಾವಣೆ ನಡೆಸದಿರುವ ಸ್ಥಳೀಯ ಸಂಸ್ಥೆಗಳ ಒಟ್ಟು ಸಂಖ್ಯೆ ಎಷ್ಟು; (ಪ್ರತ್ಯೇಕವಾಗಿ ವಿವರ ನೀಡುವುದು) | ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾವಣೆ ನಡೆಯದಿರುವ ನಗರ ಸ್ಥಳೀಯ ಸಂಸ್ಥೆಗಳ ಒಟ್ಟು ಸಂಖ್ಯೆ <u>**268.**</u><br>ಜಿಲ್ಲಾವಾರು ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ) | ಸದರಿ ಸಂಸ್ಥೆಗಳ ಅಧ್ಯಕ್ಷರ/ | ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ 9 ನೇ ಅವಧಿಗೆ |

| | | |
|---|---|---|
| | ಉಪಾಧ್ಯಕ್ಷರ ಸ್ಥಾನಕ್ಕೆ ಇದುವರೆವಿಗೆ ಚುನಾವಣೆ ನಡೆಸದಿರಲು ಕಾರಣಗಳೇನು ;<br>(ವಿವರ ನೀಡುವುದು) | ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ಸಂಖ್ಯೆ:ನಅಇ 82 ಎಂಎಲ್‌ಆರ್ 2018(1)(2)(3), ದಿನಾಂಕ 03.09.2018 ರಲ್ಲಿ ನಿಗದಿಪಡಿಸಿ ಅಧಿಸೂಚನೆ ಹೊರಡಿಸಲಾಗಿತ್ತು.<br><br>ಈ ಮೀಸಲಾತಿ ಅಧಿಸೂಚನೆಗಳನ್ನು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು/ಧಾರವಾಡ/ಕಲಬುರ್ಗಿ ಇಲ್ಲಿ ಪ್ರಶ್ನಿಸಿದ್ದು, ಧಾರವಾಡ ಪೀಠವು ರಿಟ್ ಅರ್ಜಿ ಸಂಖ್ಯೆ:105750-754/2018 ಹಾಗೂ ಇತರೇ ಪ್ರಕರಣಗಳಲ್ಲಿ ದಿನಾಂಕ 10.09.2018 ರಂದು ತಡೆಯಾಜ್ಞೆ ನೀಡಲಾಗಿತ್ತು.<br><br>ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿ, ತಡೆಯಾಜ್ಞೆ ಇದ್ದುದ್ದರಿಂದ ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲ.<br><br>ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ:47171/2018 c/w ಇತರೇ ಪ್ರಕರಣಗಳಲ್ಲಿ ನ್ಯಾಯಾಲಯವು ದಿನಾಂಕ 18.01.2019 ರಂದು ನೀಡಲಾದ ತೀರ್ಪಿನಲ್ಲಿ ರಿಟ್ ಅರ್ಜಿಯನ್ನು ವಜಾಗೊಳಿಸಿರುತ್ತದೆ. ಸದರಿ ತೀರ್ಪನ್ನು ಪ್ರಶ್ನಿಸಿ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅಪೀಲು ಸಂಖ್ಯೆ:157-176/2019 c/w ಇತರೇ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣವು ಅಂತಿಮವಾಗಿ ದಿನಾಂಕ 07.11.2019 ರಂದು ವಿಚಾರಣೆಗೆ ಬಂದು ಪ್ರಕರಣವನ್ನು ವಿಲೇವಾರಿ ಮಾಡಿರುತ್ತದೆ. ಆ ಪ್ರಕಾರ ದಿನಾಂಕ 03.09.2018 ರ ಅಧಿಸೂಚನೆಯನ್ನು ದಿನಾಂಕ 06.02.2020 ರಂದು ಹಿಂಪಡೆಯಲಾಗಿದೆ.<br><br>ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ:2356/2020 ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ 26.02.2020 ರಂದು ವಿಚಾರಣೆ ನಡೆಸಿ, ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮಾರ್ಗಸೂಚಿಗಳನ್ನು ಅನುಸರಿಸಿ ಹೊಸದಾಗಿ ಮೀಸಲಾತಿ ಅಧಿಸೂಚನೆಗಳನ್ನು ಹೊರಡಿಸಲು ಕೈಗೊಂಡಿರುವ ಕ್ರಮದ ಬಗ್ಗೆ ದಾಖಲೆಗಳನ್ನು |

ಮಾನ್ಯ ಉಚ್ಛ ನ್ಯಾಯಾಲಯಕ್ಕೆ ಸಲ್ಲಿಸುವಂತೆ, ಅಲ್ಲಿಯವರೆಗೆ ಮೀಸಲಾತಿ ಅಧಿಸೂಚನೆಗಳನ್ನು ಹೊರಡಿಸಬಾರದೆಂದು ನ್ಯಾಯಾಲಯದಿಂದ ನಿರ್ದೇಶನ ನೀಡಲಾಗಿತ್ತು. ತದನಂತರ, ಈ ಪ್ರಕರಣವು ದಿನಾಂಕ 10.03.2020 ರಂದು ಇತ್ಯರ್ಥಗೊಂಡಿದ್ದು, ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ 9ನೇ ಅವಧಿಗೆ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿ ಅಧಿಸೂಚನೆಗಳನ್ನು ದಿನಾಂಕ 11.03.2020 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿತ್ತು.

ಮಾನ್ಯ ಉಚ್ಛ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಿಸಿರುವ ರಿಟ್ ಅರ್ಜಿ ಸಂಖ್ಯೆ:5999/2020 c/w ಇತರೇ ಪ್ರಕರಣಗಳಲ್ಲಿ ಅರ್ಜಿದಾರರು ದಿನಾಂಕ 06.02.2020 ಮತ್ತು 11.03.2020 ರ ಅಧಿಸೂಚನೆಗಳನ್ನು ಪ್ರಶ್ನಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ:17.03.2020 ರಂದು ವಿಚಾರಣೆ ನಡೆಸಿ, ಈ ಕೆಳಕಂಡಂತೆ ನಿರ್ದೇಶನ ನೀಡಿರುತ್ತದೆ.

"List these matters on 01.04.2020, till then, the official respondents are hereby directed not to precipitate in filling of the posts of President and Vice President of City Municipal Council, Town Municipal and Town Panchayath Council, pursuant to 06.02.2020 and 11.03.2020 notifications".

ಈ ಪ್ರಕರಣದಲ್ಲಿ ದಿನಾಂಕ 18.08.2020 ರಂದು ವಿಚಾರಣೆ ನಡೆಸಿದ ನ್ಯಾಯಾಲಯವು ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾವಣೆ ನಡೆಸಲು ಮೀಸಲಾತಿ ನಿಗದಿಪಡಿಸುವ ಪ್ರಕ್ರಿಯೆಯನ್ನು ದಿನಾಂಕ 02.10.2020 ರೊಳಗೆ ಪೂರ್ಣಗೊಳಿಸಲು ನಿರ್ದೇಶನ ನೀಡಿ, ವಿಚಾರಣೆಯನ್ನು ದಿನಾಂಕ 06.10.2020 ಕ್ಕೆ ಮುಂದೂಡಲಾಗಿದೆ.

ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ನಿಗದಿಪಡಿಸಲಾದ ಮೀಸಲಾತಿ ಅಧಿಸೂಚನೆಗಳು ನ್ಯಾಯಾಲಯದಲ್ಲಿ ಪ್ರಶ್ನಿತವಾಗಿದ್ದು, ಪ್ರಕರಣಗಳು ನ್ಯಾಯಾಲಯದಲ್ಲಿ ಬಾಕಿ

| | | |
|---|---|---|
| | | ಇರುವುದರಿಂದ ನಗರ ಸ್ಥಳೀಯ ಸಂಸ್ಥೆಗಳ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲ. |
| ಈ) | ಯಾವ ಕಾಲಮಿತಿಯಲ್ಲಿ ಸದರಿ ಹುದ್ದೆಗಳಿಗೆ ಚುನಾವಣೆ ನಡೆಸಲಾಗುವುದು? | ಮಾನ್ಯ ಉಚ್ಚ ನ್ಯಾಯಾಲಯದ ಆದೇಶದನ್ವಯ ಹಾಗೂ ಸಚಿವ ಸಂಪುಟದ ಅನುಮೋದನೆಯನ್ವಯ ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ 9ನೇ ಅವಧಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿ ನಿಗದಿಪಡಿಸಲು ಮಾರ್ಗಸೂಚಿಗಳನ್ನು ಪರಿಷ್ಕರಿಸಿ, ದಿನಾಂಕ 11.09.2020 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ. ಸದರಿ ಮಾರ್ಗಸೂಚಿಗಳನ್ನು ಆಧರಿಸಿ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ 9ನೇ ಅವಧಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾವಣೆ ನಡೆಸಲು ಮೀಸಲಾತಿ ಅಧಿಸೂಚನೆಗಳನ್ನು ಪ್ರಕಟಿಸಲು ಶೀಘ್ರದಲ್ಲಿಯೇ ಕ್ರಮಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ/28/ಎಲ್‌ಸಿಕ್ಯೂ/2020

(ನಾರಾಯಣ ಗೌಡ)

ಮಾನ್ಯ ಪೌರಾಡಳಿತ, ತೋಟಗಾರಿಕೆ

ಹಾಗೂ ರೇಷ್ಮೆ ಸಚಿವರು

Note No. #2 Attachment:LCQ-241.pdf

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 241ರ ಅನುಬಂಧ

| ಕ್ರ ಸಂ | ಜಿಲ್ಲೆ | ನಗರಸಭೆ | ಪುರಸಭೆ | ಪಟ್ಟಣ ಪಂಚಾಯಿತಿ |
|---|---|---|---|---|
| 1 | ಶಿವಮೊಗ್ಗ | ಭದ್ರಾವತಿ | ಶಿಕಾರಿಪುರ | ಜೋಗ್ ಕಾರ್ಗಲ್ |
| | | ಸಾಗರ | | ಶಿರಾಳಕೊಪ್ಪ |
| | | | | ತೀರ್ಥಹಳ್ಳಿ |
| | | | | ಸೊರಬ |
| | | | | ಹೊಸನಗರ |
| 2 | ದಾವಣಗೆರೆ | ಹರಿಹರ | ಹರಪನಹಳ್ಳಿ | ಹೊನ್ನಾಳಿ |
| | | | ಚನ್ನಗಿರಿ | ಜಗಳೂರು |
| | | | ಮಲೇಬೆನ್ನೂರು | |
| 3 | ಚಿತ್ರದುರ್ಗ | ಚಿತ್ರದುರ್ಗ | ಹೊಸದುರ್ಗ | ಹೊಳಲ್ಕೆರೆ |
| | | ಚಳ್ಳಕೆರೆ | | ಮೊಳಕಾಲ್ಮೂರು |
| | | ಹಿರಿಯೂರು | | ನಾಯಕನಹಟ್ಟಿ |
| 4 | ತುಮಕೂರು | ಶಿರಾ | ಚಿಕ್ಕನಾಯಕನಹಳ್ಳಿ | ಗುಬ್ಬಿ |
| | | ತಿಪಟೂರು | ಕುಣಿಗಲ್ | ಕೊರಟಗೆರೆ |
| | | | ಮಧುಗಿರಿ | ತುರುವೇಕೆರೆ |
| | | | ಪಾವಗಡ | ಹುಳಿಯಾರು |
| 5 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ಗುಡಿಬಂಡೆ |
| | | ಚಿಂತಾಮಣಿ | | |
| | | ಶಿಡ್ಲಘಟ್ಟ | | |
| | | ಗೌರಿಬಿದನೂರು | | |
| 6 | ಬೆಂಗಳೂರು ನಗರ | ಹೆಬ್ಬಗೋಡಿ | ಆನೇಕಲ್ | ದೊಡ್ಡ ತೋಗೂರು |
| | | | ಬೊಮ್ಮಸಂದ್ರ | |
| | | | ಜಿಗಣಿ | |
| | | | ಚಂದಾಪುರ | |
| | | | ಅತ್ತಿಬೆಲೆ | |
| | | | ಕೋನಪ್ಪನ ಅಗ್ರಹಾರ | |
| 7 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | ವಿಜಯಪುರ | |
| | | ಹೊಸಕೋಟೆ | ದೇವನಹಳ್ಳಿ | |
| | | | ನೆಲಮಂಗಲ | |
| 8 | ರಾಮನಗರ | ರಾಮನಗರ | ಮಾಗಡಿ | |
| | | ಚನ್ನಪಟ್ಟಣ | ಬಿಡದಿ | |
| | | ಕನಕಪುರ | | |
| 9 | ಕೋಲಾರ | ಕೋಲಾರ | ಬಂಗಾರಪೇಟೆ | |
| | | ರಾಬರ್ಟ್‌ಸನ್ ಪೇಟೆ | ಮಾಲೂರು | |
| | | ಮುಳಬಾಗಿಲು | ಶ್ರೀನಿವಾಸಪುರ | |
| 10 | ಉಡುಪಿ | ಉಡುಪಿ | ಕಾರ್ಕಳ | ಸಾಲಿಗ್ರಾಮ |
| | | | ಕುಂದಾಪುರ | |
| | | | ಕಾಪು | |

| | | | | |
|---|---|---|---|---|
| 11 | ಚಿಕ್ಕಮಗಳೂರು | ಚಿಕ್ಕಮಗಳೂರು | ಬೀರೂರು | ಕೊಪ್ಪ |
| | | | ಕಡೂರು | ಮೂಡಿಗೆರೆ |
| | | | ತರೀಕೆರೆ | ನರಸಿಂಹರಾಜಪುರ |
| | | | | ಶೃಂಗೇರಿ |
| 12 | ದಕ್ಷಿಣ ಕನ್ನಡ | ಉಳ್ಳಾಲ | ಬಂಟ್ವಾಳ | ಬೆಳ್ತಂಗಡಿ |
| | | ಪುತ್ತೂರು | ಮೂಡಬಿದಿರೆ | ಸುಳ್ಯ |
| | | | ಸೋಮೇಶ್ವರ | ಮುಲ್ಕಿ |
| | | | | ಬಜ್ಪೆ |
| | | | | ಕೋಟೆಕಾರು |
| 13 | ಹಾಸನ | ಹಾಸನ | ಬೇಲೂರು | ಆಲೂರು |
| | | ಅರಸೀಕೆರೆ | ಚನ್ನರಾಯಪಟ್ಟಣ | ಅರಕಲಗೂಡು |
| | | | ಹೊಳೆನರಸೀಪುರ | |
| | | | ಸಕಲೇಶಪುರ | |
| 14 | ಕೊಡಗು | ಮಡಿಕೇರಿ | | ಕುಶಾಲನಗರ |
| | | | | ಸೋಮವಾರಪೇಟೆ |
| | | | | ವಿರಾಜಪೇಟೆ |
| 15 | ಮಂಡ್ಯ | ಮಂಡ್ಯ | ಕೆ.ಆರ್.ಪೇಟೆ | ಬೆಳ್ಳೂರು |
| | | | ಮದ್ದೂರು | |
| | | | ಮಳವಳ್ಳಿ | |
| | | | ಶ್ರೀರಂಗಪಟ್ಟಣ | |
| | | | ಪಾಂಡವಪುರ | |
| | | | ನಾಗಮಂಗಲ | |
| 16 | ಮೈಸೂರು | ಹುಣಸೂರು | ಬನ್ನೂರು | ಸರಗೂರು |
| | | ನಂಜನಗೂಡು | ಕೆ.ಆರ್.ನಗರ | |
| | | | ಪಿರಿಯಾಪಟ್ಟಣ | |
| | | | ಟಿ.ನರಸೀಪುರ | |
| | | | ಹೆಚ್.ಡಿ. ಕೋಟೆ | |
| 17 | ಚಾಮರಾಜನಗರ | ಕೊಳ್ಳೇಗಾಲ | ಗುಂಡ್ಲುಪೇಟೆ | ಯಳಂದೂರು |
| | | ಚಾಮರಾಜನಗರ | | ಹನೂರು |
| 18 | ವಿಜಯಪುರ | | ಬಸವನಬಾಗೇವಾಡಿ | ಆಲಮೇಲ |
| | | | ಇಂಡಿ | ಕೊಲ್ಹಾರ |
| | | | ಮುದ್ದೇಬಿಹಾಳ | ನಾಲತವಾಡ |
| | | | ಸಿಂಧಗಿ | ನಿಡಗುಂದಿ |
| | | | ತಾಳಿಕೋಟೆ | ಮನಗೂಳಿ |
| | | | | ದೇವರ ಹಿಪ್ಪರಗಿ |
| | | | | ಚಡಚಣ |
| 19 | ಬೆಳಗಾವಿ | ಗೋಕಾಕ್ | ಅಥಣಿ | ಖಾನಾಪುರ |
| | | ನಿಪ್ಪಾಣಿ | ಬೈಲಹೊಂಗಲ | ರಾಯಬಾಗ |
| | | | ಚಿಕ್ಕೋಡಿ | ಕಂಕನವಾಡಿ |
| | | | ರಾಮದುರ್ಗ | ಎಂ.ಕೆ ಹುಬ್ಬಳ್ಳಿ |
| | | | ಸಂಕೇಶ್ವರ | ನಾಗನೂರ |

| | | | | |
|---|---|---|---|---|
| | | | ಸವದತ್ತಿ | ಚಿಂಚಲಿ |
| | | | ಮೂಡಲಗಿ | ಮಲ್ಲಾಪುರ ಪಿ ಜಿ |
| | | | ಮುಗಳಖೋಡ | ಯಕ್ಸಂಬ |
| | | | ಮುನವಳ್ಳಿ | ಚೆನ್ನಮ್ಮನ ಕಿತ್ತೂರ |
| | | | ಉಗಾರ ಖುರ್ದ್ | ಕಲ್ಲೋಳಿ |
| | | | ಹಾರುಗೇರಿ | ಐನಾಪುರ |
| | | | ಹುಕ್ಕೇರಿ | ಶೇಡಬಾಳ |
| | | | ಕುಡಚಿ | ಕಬ್ಬೂರ |
| | | | ಸದಲಗ | ಬೋರಗಾಂವ್ |
| | | | ಕೊಣ್ಣೂರು | ಅರಬಾವಿ |
| 20 | ಬಾಗಲಕೋಟೆ | ಬಾಗಲಕೋಟೆ | ಹುನಗುಂದ | ಬೀಳಗಿ |
| | | ಇಳಕಲ್ | ಬಾದಾಮಿ | ಕೆರೂರು |
| | | ಜಮಖಂಡಿ | ಗುಳೇದಗುಡ್ಡ | ಅಮೀನಗಡ |
| | | ರಬಕವಿ ಬನಹಟ್ಟಿ | ಮಹಾಲಿಂಗಪುರ | ಬೆಳಗಲಿ |
| | | ಮುಧೋಳ | ತೇರದಾಳ | ಕಮತಗಿ |
| 21 | ಧಾರವಾಡ | | ಅಣ್ಣಿಗೇರಿ | ಅಳ್ನಾವರ |
| | | | ನವಲಗುಂದ | ಕಲಘಟಗಿ |
| | | | | ಕುಂದಗೋಳ |
| 22 | ಗದಗ | ಗದಗ-ಬೆಟಗೇರಿ | ಗಜೇಂದ್ರಗಡ | ಮುಳಗುಂದ |
| | | | ಲಕ್ಷ್ಮೇಶ್ವರ | ನರೇಗಲ್ |
| | | | ಮುಂಡರಗಿ | ಶಿರಹಟ್ಟಿ |
| | | | ನರಗುಂದ | |
| | | | ರೋಣ | |
| 23 | ಉತ್ತರ ಕನ್ನಡ | ದಾಂಡೇಲಿ | ಭಟ್ಕಳ | ಜಾಲಿ |
| | | ಕಾರವಾರ | ಕುಮುಟ | ಹೊನ್ನಾವರ |
| | | ಶಿರಸಿ | ಹಳಿಯಾಳ | ಮುಂಡಗೋಡು |
| | | | ಅಂಕೋಲ | ಸಿದ್ದಾಪುರ |
| | | | | ಯಲ್ಲಾಪುರ |
| 24 | ಹಾವೇರಿ | ಹಾವೇರಿ | ಬಂಕಾಪುರ | ಹಿರೇಕೆರೂರು |
| | | ರಾಣೆಬೆನ್ನೂರು | ಬ್ಯಾಡಗಿ | ಗುತ್ತಲ |
| | | | ಹಾನಗಲ್ | |
| | | | ಸವಣೂರು | |
| | | | ಶಿಗ್ಗಾಂವ್ | |
| 25 | ಬೀದರ್ | ಬಸವಕಲ್ಯಾಣ | ಭಾಲ್ಕಿ | ಔರಾದ್(ಬಿ) |
| | | ಬೀದರ್ | ಚಿಟಗುಪ್ಪ | |
| | | | ಹುಮ್ನಾಬಾದ್ | |
| | | | ಹಳ್ಳಿಖೇಡ | |
| 26 | ಕಲಬುರಗಿ (ಗುಲ್ಬರ್ಗಾ) | ಶಹಾಬಾದ್ | ವಾಡಿ | ಕಾಳಗಿ |
| | | | ಆಳಂದ | |
| | | | ಚಿಂಚೋಳಿ | |
| | | | ಚಿತ್ತಾಪುರ | |
| | | | ಸೇಡಂ | |

| | | | | |
|---|---|---|---|---|
| | | | ಜೇವರ್ಗಿ | |
| | | | ಅಫಜಲ್‌ಪುರ | |
| 27 | ಯಾದಗಿರಿ | ಯಾದಗಿರಿ | ಗುರುಮಿಟ್ಕಲ್ | |
| | | ಸುರಪುರ | ಕಕ್ಕೇರಾ | |
| | | ಶಹಾಪುರ | ಕೆಂಭಾವಿ | |
| 28 | ರಾಯಚೂರು | ರಾಯಚೂರು | ದೇವದುರ್ಗ | ಕವಿತಾಳ |
| | | ಸಿಂಧನೂರು | ಲಿಂಗಸುಗೂರು | ತುರುವಿಹಾಳ |
| | | | ಮಾನ್ವಿ | ಬಳಗಾನೂರು |
| | | | ಮುದಗಲ್ | ಸಿರವಾರ |
| | | | ಮಸ್ಕಿ | ಹಟ್ಟಿ |
| 29 | ಕೊಪ್ಪಳ | ಕೊಪ್ಪಳ | ಕುಷ್ಟಗಿ | ಯಲಬುರ್ಗ |
| | | ಗಂಗಾವತಿ | ಕಾರಟಗಿ | ಕನಕಗಿರಿ |
| | | | | ಕುಕನೂರು |
| | | | | ತಾವರಗೇರಾ |
| | | | | ಭಾಗ್ಯನಗರ |
| 30 | ಬಳ್ಳಾರಿ | ಸಿರುಗುಪ್ಪ | ಹೂವಿನಹಡಗಲಿ | ಕಮಲಾಪುರ |
| | | ಹೊಸಪೇಟೆ | ಕಂಪ್ಲಿ | ಕೊಟ್ಟೂರು |
| | | | ಸಂಡೂರು | ಕೂಡ್ಲಿಗಿ |
| | | | ಹಗರಿಬೊಮ್ಮನಹಳ್ಳಿ | ತೆಕ್ಕಲಕೋಟೆ |
| | | | ಕುರೇಕುಪ್ಪ | ಕುಡುತಿನಿ |
| | | | ಕುರುಗೋಡು | ಮರಿಯಮ್ಮನ ಹಳ್ಳಿ |
| | ಒಟ್ಟು | 58 | 117 | 93 |